


# ಕರ್ನಾಟಕ ವಿಧಾನಪರಿಷತ್ತು

ನೂರ ನಲವತ್ತ ಮೂರನೆಯ ಅಧಿವೇಶನದ ಮುಂದುವರೆದ ಉಪವೇಶನ

**ಚುಕ್ಕೆ ಗುರುತಿನ ಪ್ರಶ್ನೆ**

ದಿನಾಂಕ : 18-03-2021 ಪ್ರಶ್ನೆ ಸಂಖ್ಯೆ : 215(1563)

ಸದಸ್ಯರ ಹೆಸರು ಮತ್ತು ಕ್ಷೇತ್ರ : ಶ್ರೀ ಎಸ್. ರವಿ(ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

ಉತ್ತರ ನೀಡಬೇಕಾದ ದಿನಾಂಕ : 18-03-2021

ಉತ್ತರಿಸುವ ಸಚಿವರು: ಗೃಹ ಮತ್ತು ಕಾನೂನು, ಸಂಸದೀಯ ವ್ಯವಹಾರಗಳು ಹಾಗೂ ಶಾಸನ ರಚನೆ ಸಚಿವರು

ವಿಷಯ : ಪೊಲೀಸ್ ಇಲಾಖೆ ನೌಕರರು ನಿಗಧಿಗಿಂತ ಹೆಚ್ಚು ಸಮಯ ಕರ್ತವ್ಯ ನಿರ್ವಹಿಸುತ್ತಿರುವ ಬಗ್ಗೆ

(ಅ) ಪೊಲೀಸ್ ಇಲಾಖೆಯಲ್ಲಿ ಕಾನ್ಸ್‌ಟೇಬಲ್/ಹೆಡ್ ಕಾನ್ಸ್‌ಟೇಬಲ್‌ಗಳು ನಿಗದಿತ ಅವಧಿಗಿಂದ ಹೆಚ್ಚು ಕಾಲ ಕರ್ತವ್ಯ ನಿರ್ವಹಿಸುತ್ತಿದ್ದು, ಇವರಿಗೆ 8 ಗಂಟೆಗಳ "ಶಿಫ್ಟ್‌ಡ್ಯೂಟಿ" ನೀಡುವ ಬಗ್ಗೆ ಸರ್ಕಾರದ ಮುಂದೆ ಯಾವುದಾದರೂ ಪ್ರಸ್ತಾಪವಿದೆಯೇ; ಇದ್ದರೆ, ಅದನ್ನು ಜಾರಿಗೊಳಿಸುವ ಬಗ್ಗೆ ಏನು ಕ್ರಮ ಕೈಗೊಳ್ಳಲಾಗಿದೆ;

(ಆ) ಪೋಲಿಸ್ ಇಲಾಖೆಯಲ್ಲಿ ಪಿಐ/ಸಿಪಿಐ ಮಟ್ಟದ ಅಧಿಕಾರಿಗಳು ಗರಿಷ್ಟ 2 ವರ್ಷ ಎಕ್ಸಿಕ್ಯೂಟಿವ್ ಹುದ್ದೆಯಲ್ಲಿ ಕರ್ತವ್ಯ ನಿರ್ವಹಿಸಿ ನಂತರ ಒಂದು ವರ್ಷ ನಾನ್ ಎಕ್ಸಿಕ್ಯೂಟಿವ್ ಹುದ್ದೆಯಲ್ಲಿ ಕರ್ತವ್ಯ ನಿರ್ವಹಿಸುವ ರೊಟೇಷನ್ ಪದ್ಧತಿ ಜಾರಿಗೆ ತರಲು ಸರ್ಕಾರವೇನಾದರೂ ಕ್ರಮ ಕೈಗೊಂಡಿದೆಯೇ;

(ಇ) ಈ ರೋಟೇಷನ್ ಪದ್ಧತಿಯಿಂದ ಎಲ್ಲಾ ಅಧಿಕಾರಿಗಳು ಪೋಲಿಸ್ ಇಲಾಖೆಯಲ್ಲಿನ ಎಲ್ಲಾ ವಿಭಾಗದಲ್ಲಿಯೂ ಕರ್ತವ್ಯ ನಿರ್ವಹಿಸುವ ಅವಕಾಶ ಸಿಗುವ ಕುರಿತು ಸರ್ಕಾರ ಗಮನ ಹರಿಸುವುದೇ?